ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 1, March-April 2024, Pp. 1-7
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ನೋ ಪ್ರೆಸೆಂಟ್ಸ್ ಪ್ಲೀಸ್ – ಸಂಬಂಧಗಳ ನಡುವೆ

**ನಾಗೇಂದ್ರ ಎಸ್[1] ಮತ್ತು ಡಾ. ಬಿ. ಪ್ರಭುಸ್ವಾಮಿ[2]**
[1]ಸಂಶೋಧನಾ ವಿದ್ಯಾರ್ಥಿ, [2]ಸಹಾಯಕ ಪ್ರಾಧ್ಯಾಪಕರು
ಕನ್ನಡ ಸ್ನಾತಕೋತ್ತರ ಮತ್ತು ಸಂಶೋಧನಾ ವಿಭಾಗ, ಜೆಎಸ್ಎಸ್ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು, ಊಟಿ ರಸ್ತೆ, ಮೈಸೂರು

***Abstract:***
*ಮುಂಬೈ ಎಂಬ ಕಾಸ್ಮೋಪಾಲಿಟನ್ ನಗರ ಎಲ್ಲಾ ವರ್ಗದ ಜನರಿಗೆ ಆಶ್ರಯ ನೀಡಿದೆ. ಮುಂಬೈನ ನಿರ್ಗತಿಕ ವರ್ಗದ ಬದುಕು ಉಳ್ಳವರ ರೂಢಿಗತ ನಿಯಮಗಳು ಅನೇಕ ಸಂದರ್ಭಗಳಲ್ಲಿ ಭಿನ್ನ ನೆಲೆಯಲ್ಲಿ ಸಾಗುತ್ತವೆ. ನಗರದೊಳಗೆ ಅನಾಥರಾಗಿ ಬೆಳೆದ ಜೋಡಿಗಳು ವಿವಾಹದ ಮೂಲಕ ಸಾಂಸ್ಥಿಕ ಚೌಕಟ್ಟಿಗೆ ಒಳಪಡುವಾಗ ಅವರಿಗೆ ಹಲವು ಸಮಸ್ಯೆಗಳು ಎದುರಾಗುತ್ತವೆ. ತನ್ನದಲ್ಲದ ನಿಯಮಗಳನ್ನು ಕುರುಡಾಗಿ ಅನುಕರಿಸುವುದರಿಂದ ತಮ್ಮ ಅಸ್ತಿತ್ವವನ್ನೆ ಕಳೆದುಕೊಳ್ಳುವ ಸಂದರ್ಭ ಎದುರಾಗುತ್ತದೆ. ಮುಂಬೈ ಯಾಂತ್ರಿಕವಾಗಿರುವುದು ವಾಸ್ತವವಾದರೂ ಪ್ರೀತಿಗೇನೂ ಕೊರತೆಯಿಲ್ಲ. ಈ ಮಹಾನಗರದೊಳಗೆ ಯಾಂತ್ರಿಕತೆ, ಜಡತ್ವ ಮಾತ್ರವಲ್ಲದೆ ಪ್ರೀತಿ, ಸ್ನೇಹ, ವಿಶ್ವಾಸಗಳಂತಹ ಜೀವಪರ ಮೌಲ್ಯಗಳು ಇವೆ, ಅವುಗಳೊಂದಿಗೆ ಗಟ್ಟಿಯಾಗುವ ಬದುಕನ್ನು ಕಾಪಿಟ್ಟುಕೊಳ್ಳಬೇಕೆಂದು ಈ ಕಥೆ ಸಾರುತ್ತದೆ.*

**Keywords:** *ಮುಂಬೈನಗರ, ವಿವಾಹ, ನಿರ್ಗತಿಕರು, ಮುಯ್ಯಿ, ಸಂಸ್ಕೃತೀಕರಣ, ಜಯಂತ ಕಾಯ್ಕಿಣಿ, ಸಾಂಸ್ಥಿಕ ಬದುಕು, ಬಹು ಸಂಸ್ಕೃತಿ.*

## ಪೀಠಿಕೆ

ಒಂದು ಸಮುದಾಯ ತನ್ನ ಜನರ ಕ್ಷೇಮಾಭಿಲಾಷೆಯ ಕಾರಣದಿಂದ ಹಲವು ನಿಯಮ, ಪದ್ಧತಿಗಳನ್ನು ಜಾರಿಗೊಳಿಸಿರುತ್ತದೆ. ಆಹಾರ, ಬಟ್ಟೆ, ವಸತಿಯಿಂದ ಮೊದಲುಗೊಂಡು ಕಾನೂನು, ನಂಬಿಕೆ, ಆಚರಣೆಗಳವರೆಗೂ ತನ್ನದೇ ಆದ ನೀತಿ ನಿಯಮಗಳನ್ನು ಹೊಂದಿರುತ್ತದೆ. ಈ ನಿಯಮ, ಪದ್ಧತಿಗಳೇ ಆ ಜನ ಸಮುದಾಯದ ಸಂಸ್ಕೃತಿಯಾಗಿ ಅಸ್ತಿತ್ವ ಪಡೆಯುತ್ತವೆ. ಕಾಲಾನಂತರದಲ್ಲಿ ಸಂಸ್ಕೃತಿಯೊಳಗಿನ ಈ ನಿಯಮಗಳು ಆ ಜನರ ಜೀವನ ಶೈಲಿಯೂ, ಒಪ್ಪಿತ ಮೌಲ್ಯವೂ ಆಗಿ ಯಾರೊಬ್ಬರೂ ದಾಟಬಾರದ ವ್ಯವಸ್ಥೆಯಾಗುತ್ತದೆ. ಮದುವೆಯೂ ಸಹ ಇಂದು ವ್ಯವಸ್ಥೆಯ ಒಂದು ಒಪ್ಪಿತ ಮೌಲ್ಯವಾಗಿದೆ. ಪೂರ್ವಜರು ಮನುಕುಲದ ಉಳಿವಿಗೋ, ಸಂಬಂಧಗಳ ಬೆಸುಗೆಗೋ ಇತ್ಯಾದಿ ಕಾರಣಗಳಿಗಾಗಿಯೋ ಈ ಮದುವೆಯನ್ನು ಸಿಂಧುಗೊಳಿಸಿದರು. ಗಂಡು ಹೆಣ್ಣು ನಾಗರಿಕರೆದುರು ಸಾಕ್ಷೀಕರಿಸಿಕೊಂಡು ಸಮಾಜದೊಳಗೆ ಒಟ್ಟಿಗೆ ಜೀವಿಸಲು ಮದುವೆ ಎಂಬುದು ಸಿಂಧುತ್ವ.

ಆದರೆ ಇಂದು ವ್ಯವಹಾರದ ಕಪಿಮುಷ್ಟಿಗೆ ಸಿಕ್ಕಿರುವ ಈ ಪರಿಕಲ್ಪನೆ ಬೇರೆಯದೆ ರೂಪ ಪಡೆದಿದೆ. ವೈಭವದ ಶೃಂಗಾರ, ಭಾರಿ ಭೋಜನ, ಸಾವಿರಕ್ಕೂ ಹೆಚ್ಚಿನ ಆಹ್ವಾನಿತರು, ಲಕ್ಷ, ಕೋಟಿಗಳ

***Please cite this article as:*** ನಾಗೇಂದ್ರ ಎಸ್ & ಬಿ. ಪ್ರಭುಸ್ವಾಮಿ. (2024). ನೋ ಪ್ರೆಸೆಂಟ್ಸ್ ಪ್ಲೀಸ್ – ಸಂಬಂಧಗಳ ನಡುವೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(1), 1–7

ಖರ್ಚುವೆಚ್ಚ ಇಂದಿನ ಸಿರಿವಂತರ ಮದುವೆಗಳ ಪರಿ. ಉಳ್ಳವರ ಈ ಮಾದರಿಗಳು ಸಮಾಜದೊಳಗಿನ ಬಡ ಮತ್ತು ನಿರ್ಗತಿಕರ ಪ್ರಪಂಚಗಳ ಮೇಲೆ ಪ್ರಭಾವಿಸಿರುವುದು ಶೋಚನಿಯ.

ಈ ಮದುವೆ ಪರಿಕಲ್ಪನೆಯ ಜೊತೆಯಲ್ಲಿರುವ ಮುಯ್ಯಿ ಎಂಬ ನಿಯಮವೂ ಕೂಡ ಪೂರ್ವಿಕರ ಕೊಡುಗೆಯೇ ಆಗಿದೆ. ಮುಯ್ಯಿ ಎಂಬ ಕೊಡುಕೊಳ್ಳುವಿಕೆಯು ಸಂಬಂಧಗಳನ್ನು ಬೆಸೆಯುವ, ಗಟ್ಟಿಗೊಳಿಸುವ ಉದ್ದೇಶ ಹೊಂದಿದೆ. ಕೊಡುಕೊಳ್ಳುವಿಕೆ ಗಾಢವಾಗಿದ್ದ ಪರಿಸರದೊಳಗೆ ಸಂಬಂಧಗಳು ಜೀವಂತವು, ಆಪ್ತವೂ ಆಗಿರುತ್ತವೆ. ಆದ್ದರಿಂದ ವಸ್ತು ಅಥವ ಹಣರೂಪಿ ಉಡುಗೊರೆ ಮೂಲಕ ಮತ್ತೊಬ್ಬರ ಕಷ್ಟದ ಸನ್ನಿವೇಶಕ್ಕೆ ಭಾಗಿಯಾಗುವ ಮತ್ತು ತನಗೂ ಮುಂದೆ ನೆರವಾಗುವಂತೆ ಬಯಸುವ ಪ್ರಜ್ಞೆ ಮುಯ್ಯಿ ಪರಿಕಲ್ಪನೆಯದ್ದು. ಅದಕ್ಕಾಗಿಯೆ ಈ ನಿಯಮವನ್ನು ಪೂರ್ವಿಕರು ಸಂಸ್ಕೃತೀಕರಣಗೊಳಿಸಿದ್ದಾರೆ. ದೇವನೂರರ **"**ಸಂಬಂಜ ಅನ್ನೋದು ದೊಡ್ಡದುಕನಾ**"**[1] ಎಂಬ ಮಾತು ನಮ್ಮ ಸಂಸ್ಕೃತಿಯೊಳಗಿನ ಸಂಬಂಧದ ಪರಿಕಲ್ಪನೆಗೆ ಹಿಡಿದ ಕನ್ನಡಿಯಂತಿದೆ.

ಇತ್ತೀಚಿನ ದಿನಗಳಲ್ಲಿ ಉಳ್ಳವರು ತಮ್ಮ ಲಗ್ನ ಪತ್ರಿಕೆಗಳಲ್ಲಿ ನಿಮ್ಮ ಬರುವಿಕೆಯೆ ಉಡುಗೊರೆ, ಯಾವುದೇ ಉಡುಗೊರೆ ಸ್ವೀಕರಿಸುವುದಿಲ್ಲ, ನೋ ಪ್ರೆಸೆಂಟ್ಸ್ ಪ್ಲೀಸ್ ಇತ್ಯಾದಿ ಅಡಿಬರಹಗಳೊಂದಿಗೆ ಆಹ್ವಾನಿಸುತ್ತಾರೆ. ಈ ಸೌಜನ್ಯ ರೂಪದ ಆಹ್ವಾನದ ಅರ್ಥ ಬೇರೆಯದೆ ನೆಲೆಯಲ್ಲಿದೆ. ಸಿರಿವಂತರು ಈ ಕೊಡುಕೊಳ್ಳು ಸಂಸ್ಕೃತಿಯಿಂದ ದೂರ ಉಳಿದು, ಆ ಮೂಲಕ ಸಂಬಂಧಗಳಿಂದಲೇ ಅಂತರ ಕಾಯ್ದುಕೊಳ್ಳುವ, ತಮ್ಮ ಖಾಸಗೀತನವನ್ನು ಕಾಪಿಡುವ ಯೋಚನೆ ಅವರದ್ದಾಗಿದೆ ಎಂದರೆ ತಪ್ಪಾಗಲಾರದು. ಆದರೆ ಕೊಡುಕೊಳ್ಳುವಿಕೆಯನ್ನು ನಿರಾಕರಿಸುವುದಾಗಲಿ, ಸಂಬಂಧಗಳಿಂದ ದೂರ ಉಳಿಯುವುದಾಗಲಿ ಸಮಾಜದ ಬಡ ಮತ್ತು ನಿರ್ಗತಿಕ ವರ್ಗಕ್ಕೆ ಸಾಧ್ಯವಿಲ್ಲ. ಸಂಬಂಧಗಳನ್ನು ಕಾಪಿಟ್ಟು, ಎಲ್ಲರೊಡನೆ ಕೂಡಿ ಬದುಕುವುದೇ ಸಾರ್ಥಕ ಬದುಕು ಎಂಬುದು ಸಾರ್ವಕಾಲಿಕ ಮೌಲ್ಯವಾಗಿದೆ.

ಈ ಮೌಲ್ಯವೇ ಜಯಂತ ಕಾಯ್ಕಿಣಿ ಅವರ ನೋ ಪ್ರೆಸೆಂಟ್ಸ್ ಪ್ಲೀಸ್ ಕತೆಯ ತಾತ್ವಿಕತೆಯು ಆಗಿದ್ದು, ಮುಂಬೈ ಶಹರ ಮತ್ತು ಈ ಶಹರದೊಳಗಿನ ಅನಾಥವರ್ಗ ಕತೆಯ ಮುಖ್ಯಭೂಮಿಕೆಯಾಗಿದೆ. ಈ ಅನಾಥ ವರ್ಗಕ್ಕೂ ಮುಂಬೈ ನಗರಕ್ಕೂ ಕೊಡುಕೊಳ್ಳುವಿಕೆ ಸಂಬಂಧವಿದೆ. ಮುಂಬೈ ಇಂತಹ ವರ್ಗಕ್ಕೆ ಮಾತೃ ಸ್ಥಾನದಲ್ಲಿ ನಿಂತು ತನ್ನೊಡಲೊಳಗೆ ಅವರನ್ನೆಲ್ಲ ಸಲಹುವ ಕಾರ್ಯದಲ್ಲಿ ನಿರತವಾಗಿದೆ. ವ್ಯವಸ್ಥೆಯ ರೂಢಿಗತ ನಿಯಮಗಳು ಸಮಾಜದ ಅಂಚಿನಲ್ಲಿರುವ ಜನ ಸಮೂಹಕ್ಕೆ ಒಡ್ಡಿರುವ ಸಮಸ್ಯೆಗಳನ್ನು ಕತೆ ತನ್ನೊಡಲಲ್ಲಿ ಅಡಗಿಸಿಕೊಂಡಿದೆ. ಸಿರಿವಂತರ ಮತ್ತು ನಿರ್ಗತಿಕರ ಬದುಕನ್ನು ಕತೆಯೊಳಗೆ ಮುಖಾಮುಖಿಯಾಗಿಸಿದ್ದಾರೆ.

ಸಮಾಜದ ರೂಢಿಗತ ನಿಯಮಗಳನ್ನು, ವ್ಯವಸ್ಥೆಯ ನಿರ್ದಯ ಪದ್ಧತಿಗಳನ್ನು ಜಯಂತರು ವಿರೋಧಿಸುವ ಮೂಲಕ ಸಂಬಂಧಗಳ ಮೌಲ್ಯಗಳನ್ನು ಪುಷ್ಟೀಕರಿಸುತ್ತ ಹೊಸದಾದ ಲೋಕವೊಂದನ್ನು ಓದುಗರಿಗೆ ತೆರೆದಿದ್ದಾರೆ. ವ್ಯವಸ್ಥೆಯೊಳಗಿನ ನಿಯಮಗಳು ಸಮಾಜದಲ್ಲಿನ ಅಂಚಿನ ಜನರಿಗೆ ತೊಡಕಾಗಿ ಪರಿಣಮಿಸುವ ಬಗೆಯನ್ನು ಕತೆಯೊಳಗೆ ಕೇಂದ್ರೀಕರಿಸಿದ್ದಾರೆ. ಈ ಮಹಾನಗರಿ ಕುರಿತ ಸಾಂಪ್ರದಾಯಿಕ ನೋಟದ ಜೊತೆ ಜೊತೆಗೆ ಅದರ ಭಿನ್ನ ದರ್ಶನವನ್ನು ಅನಾವರಣಗೊಳಿಸಿದ್ದಾರೆ. **"**ಯಾವುದನ್ನು ಸಮಾಜದ ಕ್ಷೇಮದ ಹೆಸರಿನಲ್ಲಿಯೇ ಸಮಾಜ ವಿರೋಧಿಸುತ್ತದೋ, ಅದನ್ನೇ ಸಮಾಜದ ಕ್ಷೇಮದ ಹೆಸರಿನಲ್ಲಿ ಆತ ಸ್ಥಾಪಿಸಲು ಹೊರಟಿರುತ್ತಾನೆ. ಇಂಥ ಪ್ರಬಲಚೇತಸರಿಂದಲೇ ಮಾನವ ನಾಗರಿಕತೆ ಹೊಸ ಹೊಸ ತೇಜಸ್ಸನ್ನು, ಹೊಸ ಹೊಸ ಆಯಾಮವನ್ನು ಪಡೆದುಕೊಳ್ಳುತ್ತಾ ಬಂದಿದೆ**"**[2] ಎಂಬ

ಜಿ. ಎಚ್. ನಾಯಕರ ಮಾತು ಸಮಾಜ ಸುಧಾರಣೆಗೆ ಶ್ರಮಿಸಿರುವ ತತ್ವಜ್ಞಾನಿಗಳು, ಇತಿಹಾಸಕಾರರು, ಕಲೆಗಾರರು, ಹೋರಾಟಗಾರರಿಗೆ ಅನ್ವಯಿಸುವಂತೆ ಸಾಹಿತಿ ಅಥವ ಲೇಖಕನಿಗೂ ಅನ್ವಯಿಸುವ ಮಾತಾಗಿದೆ. ಸಮಾಜದೊಳಗೆ ಪರಂಪರೆ ಮತ್ತು ಸಂಸ್ಕೃತಿಯೆಂಬ ಪರಿಕಲ್ಪನೆಗಳ ಅಡಿಯಲ್ಲಿ ಕೆಲವು ರೂಢಿಗತ ನಿಯಮಗಳು ಅಸ್ತಿತ್ವ ಪಡೆದಿರುತ್ತವೆ. ಈ ನಿಯಮಗಳು ಮಾನವರ ನಡುವಿನ ಸಂಬಂಧಗಳನ್ನು ನಾಶಗೊಳಿಸುವ, ಅಸಮಾನತೆಯನ್ನು ಪೋಷಿಸುವಂತಹ ನೆಲೆಯಲ್ಲಿಯೂ ಬೇರುಬಿಟ್ಟಿರಬಹುದು. ಇಂತಹ ನಿಯಮಗಳನ್ನು ಸೃಜನಶೀಲ ಬರಹಗಾರ ತನ್ನ ಬರವಣಿಗೆಯ ಮೂಲಕ ವಿಮರ್ಶಿಸುವ ಮತ್ತು ಮುರಿದುಕಟ್ಟುವುದರೊಂದಿಗೆ ಸಮಾಜದ ಒಳಿತಿಗೆ ಮುಂದಾಗುತ್ತಾನೆ. ಪ್ರಸ್ತುತ ಕತೆಯು ಸಹ ರೂಢಿಗತ ನಿಯಮವೊಂದನ್ನು ವಿಮರ್ಶಿಸುವ, ಮುರಿದುಕಟ್ಟುವ ನೆಲೆಯಲ್ಲಿದೆ.

ಕತೆಯ ಪ್ರಾರಂಭವು ಮುಂಬೈ ಕುರಿತ ಸಾಂಪ್ರದಾಯಿಕ ನೋಟಗಳಾದ ಕಟ್ಟಡಗಳ ಕಾಮಗಾರಿ, ವಾಹನಗಳ ದಟ್ಟಣೆ, ಧೂಳು ಮತ್ತು ಹೊಗೆ, ಜನಸಂದಣಿಯಂತಹ ರೂಪಕಗಳಿಂದ ಪ್ರಾರಂಭವಾಗುತ್ತದೆ. ಅಸಾವರಿ ಲೋಕಂಡೆ ಎಂಬ ಯುವತಿ ಪೋಪಟ್ ಎಂಬ ಯುವಕ ಈ ಕಥೆಯ ಕೇಂದ್ರ ಪಾತ್ರಗಳಾಗಿದ್ದಾರೆ. ಇವರಿಬ್ಬರೂ ಅನಾಥರು. ಮುಂಬೈನ ಬಾಲ್‌ಪೆನ್ ಫ್ಯಾಕ್ಟರಿಯಲ್ಲಿ ಕಾರ್ಮಿಕರಾಗಿದ್ದಾರೆ. ಕಾರ್ಖಾನೆಯಲ್ಲಿ ಆದ ಅವರಿಬ್ಬರ ಸ್ನೇಹ, ಪ್ರೀತಿಯಾಗಿ ನಂತರ ದಾಂಪತ್ಯಕ್ಕೆ ಕಾಲಿಡಲು ಸಿದ್ಧವಾಗಿದೆ. ಹೆಚ್ಚೆಂದರೆ ನೂರರೊಳಗಿದ್ದ ತಮ್ಮ ಪರಿಚಯಸ್ತ ಬಳಗವನ್ನು ತಮ್ಮ ಮದುವೆಗೆ ಆಹ್ವಾನಿಸಲು ಕಡಿಮೆ ಬೆಲೆಯ ಲಗ್ನಪತ್ರಿಕೆಯ ಮಾದರಿಯೊಂದನ್ನು ಆಯ್ಕೆ ಮಾಡಿದ್ದಾರೆ. ಈ ಕರೆಯೋಲೆಗೆ "ಈಗೀಗ ಜನ ಶುಭಾಶಯವೇ ಉಡುಗೊರೆ, ನೋ ಪ್ರೆಸೆಂಟ್ಸ್ ಪ್ಲೀಸ್ ಎಂದೆಲ್ಲ ಹಾಕುತ್ತಾರಲ್ಲ ನಾವೂ ಹಾಕೋಣವೆ?" ಎಂದು ಅಸಾವರಿ ಪೋಪಟ್‌ನನ್ನು ಕೇಳುತ್ತಾಳೆ. ಆದರೆ ತ್ರಿಪಾಠಿಯು ಅವರ ಬಯಕೆಯನ್ನು ತಿರಸ್ಕರಿಸಿ, ಅವರಿಬ್ಬರಿಗೂ ಆಶೀರ್ವದಿಸಿ ಕಳುಹಿಸುತ್ತಾನೆ. ಆದರೆ ಪೋಪಟನಿಗೆ ಆ ಲಗ್ನಪತ್ರಿಕೆಯ ಕರಡಿನಲ್ಲಿ ಎರಡು ಸಮಸ್ಯೆಗಳು ಗೋಚರಿಸುತ್ತವೆ. ಮೊದಲನೆಯದು ಮದುವೆಯ ಹಲವು ಮಾದರಿಗಳು ಇವರ ಮುಂದೆ ನುಸುಳುತ್ತವೆ. ಸಾಂಸ್ಥಿಕ ಚೌಕಟ್ಟಿನೊಳಗೆ ರೂಢಿಯಲ್ಲಿರುವ ಮದುವೆಗಳಿಗಿಂತ ತಮ್ಮ ಮದುವೆ ಹೊರತಾಗಿದ್ದು, ಈವರೆಗಿನ ಮದುವೆ ಕರೆಯೋಲೆಗಳಲ್ಲಿ ಇರುವಂತೆ ಶುಭಕೋರುವವರು, ಜಾತಿ, ಅಡ್ಡ ಹೆಸರು ಇತ್ಯಾದಿ ಗುರುತುಗಳು ಇಬ್ಬರಿಗೂ ಇಲ್ಲದ್ದು. ಪೋಪಟ್ ಮತ್ತು ಅಸಾವರಿ ಮುಂಬೈನ ನಾಭಿಯೊಳಗೆ ಜನಿಸಿದ ಅನಾಥರು. ಇವರಿಬ್ಬರ ಪರಿಚಯಸ್ಥ ಬಳಗ ತೀರ ಕಡಿಮೆ. ಹೂ ಮಾರುವ ಹುಡುಗರು, ಇಸ್ತ್ರಿ ಮಾಡುವವ, ಪಾನ್‌ವಾಲ, ಉಪವನಗಳ ಚೌಕೀದಾರರು ಇಷ್ಟೇ ಇವರ ಬಳಗ. ಇಂತಹ ವಾಸ್ತವ ಸ್ಥಿತಿಯಲ್ಲಿ ಮುನ್ನೂರು ಕಾರ್ಡುಗಳನ್ನು ಯಾರಿಗೆ ಕೊಡುವುದು ಎನ್ನುವುದೇ ಇವರಿಬ್ಬರ ಸಮಸ್ಯೆಯಾಗಿದೆ. ಹಾಗೂ ಶುಭಕೋರುವವರ ಗೈರು. ಇಂತಹ ಸಮಯದಲ್ಲಿ ಪೋಪಟ್‌ನಿಗೆ ಬೂಟ್ ಪಾಲೀಶ್ ಮಾಡುವಾಗ ನಾಲ್ಕಾಣೆ ಹೆಚ್ಚಿಗೆ ಕೊಡುತ್ತಿದ್ದ ಪಾರ್ಸಿ ಮುದುಕರು ನೆನಪಾದರೆ, ಅಸಾವರಿಗೆ ರಿಮಾಂಡ್ ಹೋಮ್ ನ ದಾದಿಯರು ನೆನಪಾಗುತ್ತಾರೆ.

ಎರಡನೆಯದು, ಪೋಪಟ್‌ನಿಗೆ ತನ್ನ ಹೆಸರಿನ ಬಗ್ಗೆ ಕೀಳರಿಮೆ ಉಂಟಾದದ್ದು. ಅಸಾವರಿ ಲೋಕಂಡೆ ಎಂಬ ಒಳ್ಳೆಯ ಮನೆತನಕ್ಕೆ ಸೇರಿದ ಹೆಸರಿನ ಮುಂದೆ ತನ್ನ ಹೆಸರು ಕೀಳಾಗಿದೆ, ಎಂದು ಪೋಪಟ್ ತನ್ನ ಹೆಸರಿನ ಬಗ್ಗೆ ಕೀಳರಿಮೆ ಹೊಂದುತ್ತಾನೆ. ಅಸಾವರಿ ತನ್ನ ಹೆಸರಿನ ಮುಂದೆ ಇರುವ ಲೋಕಂಡೆ ಎಂಬ ಅಡ್ಡ ಹೆಸರನ್ನು ತೆಗೆದು ಹಾಕಿದಾಗ ಪೋಪಟ್ ಖುಷಿಯಾಗಿ " ನಮ್ಮನ್ನ ಸಾಕಿ ಬೆಳೆಸಿದ್ದು ಮುಂಬೈ, ಯಾರ ಯಾರದ್ದೋ ಹೆಸರಿಟ್ಟುಕೊಂಡು ಹಾಗೆಲ್ಲ ಮುಂಬೈಗೆ ಅಪಮಾನ

ಮಾಡಬಾರದು ನಾವು" ಎಂದು ಮುಂಬೈ ಕೊಟ್ಟ ಹೆಸರನ್ನೆ ಗೌರವದಿಂದ ಒಪ್ಪಿಕೊಳ್ಳುತ್ತಾನೆ. ಆದರೆ ಪುಸ್ತಕದ ವ್ಯಾಪಾರಿಯಾದ ತ್ರಿಪಾಠಿಯು ಪೋಪಟ್ ಎಂಬ ನಿನ್ನ ಹೆಸರು ಈ ಮದುವೆ ಕರೆಯೋಲೆಗೆ ಶೋಭಿಸುವುದಿಲ್ಲ ಎಂದು ಹೇಳಿದಾಗ ಪೋಪಟ್ ಬೇರೊಂದು ಹೆಸರನ್ನು ಕೊಟ್ಟುಕೊಳ್ಳುತ್ತಾನೆ. ಆ ಮೂಲಕ ಮುಂಬೈ ಆತನಿಗೆ ಕೊಟ್ಟ ಅಸ್ತಿತ್ವವನ್ನೇ ರೂಪಾಂತರಿಸಿಕೊಳ್ಳುತ್ತಾನೆ. ಆತನ ಈ ನಡವಳಿಕೆ ಅವರಿಬ್ಬರ ಲಗ್ನವನ್ನೇ ನಾಶಮಾಡಿಬಿಡುವ ಸಂದರ್ಭವನ್ನು ಸೃಷ್ಟಿಸುತ್ತದೆ. ಅಸಾವರಿಯು ವ್ಯವಸ್ಥೆಯ ಭಾಗವಾದ ಬಂಧನರೂಪಿ ಮದುವೆಯ ಮೇಲೆ ನಿರಾಸಕ್ತಿ ತೋರಿದರು, ವ್ಯವಸ್ಥೆಯನ್ನು ಮೀರಲು ಸಾಧ್ಯವಿಲ್ಲವೆಂದು ಅರಿತು ಪೋಪಟ್‌ನ ಈ ನಡತೆಗೆ ಬೇಸರಿಸಿ ಲಗ್ನ ಪತ್ರಿಕೆಯ ಕರಡನ್ನು ತನ್ನ ಪರ್ಸಿನಲ್ಲಿ ಹಾಕಿಕೊಳ್ಳುತ್ತಾಳೆ. ಇತ್ತ ಪೋಪಟ್ ಹೊಸ ಹೆಸರಿನ ಆವೇಶದಲ್ಲಿ ಮುಂಬೈ ನಗರವನ್ನು ನೋಡುತ್ತಾ ನಿಲ್ಲುವುದರೊಂದಿಗೆ ಕಥೆ ಮುಕ್ತಾಯವಾಗಿದೆ.

ಈ ಕಥೆಯು ಮುಂಬೈನ ನಿರ್ಗತಿಕರ ಬದುಕನ್ನೇ ಮುಖ್ಯಭೂಮಿಕೆಯಾಗಿಸಿಕೊಂಡಿದೆ. ಅನಾಥರಿಬ್ಬರ ಮದುವೆ ಸಂಬಂಧಿ ಚಿಂತನೆಯ ಜೊತೆಗೆ ಸಮಾಜ ಕಂಡುಕೊಳ್ಳುವ ಹೊಸ ಹೊಸ ನಿಯಮಗಳು ಅನಾಥ ಪ್ರಪಂಚಕ್ಕೆ ಹೇಗೆ ಸಮಸ್ಯೆಯಾಗಿವೆ ಎಂಬುದು ಇಲ್ಲಿ ಮುಖ್ಯ ವಿಷಯವಾಗಿದೆ. ಸಂಬಂಧಗಳನ್ನು ಬೆಸೆಯುವ ವಿವಾಹ ಪದ್ಧತಿ ಕುರಿತಂತೆ ಜಯಂತರ ನಿಲುವು ಇಲ್ಲಿ ವ್ಯಕ್ತವಾಗಿವೆ. ಪ್ರಸ್ತುತ ಕತೆಯಲ್ಲಿ ಲೇಖಕರು ಮದುವೆ ಮತ್ತು ಅದಕ್ಕಿರುವ ನಿಯಮಗಳನ್ನು ಬೇರ್ಪಡಿಸಿ ನೋಡಿದ್ದು, ಮದುವೆಯ ನಿಯಮಗಳಿಗೂ, ಮುಂಬೈನ ನಿರ್ಗತಿಕರಿಗೂ ಇರುವ ಸಂಬಂಧವನ್ನು ಕತೆಗಾರರು ಮುನ್ನೆಲೆಗೆ ತಂದಿದ್ದಾರೆ.

ಸಂಬಂಧಗಳನ್ನು ಬೆಸೆಯುವಲ್ಲಿ ಮದುವೆಗೆ ಮಹತ್ವದ ಸ್ಥಾನವಿದೆ. ಮದುವೆಯೇ ಈ ಕಥೆಯ ಮುಖ್ಯ ವಿಷಯವಾಗಿದೆ. ಸಮಾಜದೊಳಗೆ ವಿವಾಹಕ್ಕೆ ಇರುವ ನಿಯಮಗಳು ಅದೇ ಸಮಾಜದೊಳಗಿನ ಅಂಚಿನ ಜನರಿಗೆ ತೊಡಕಾಗಿರುವ ಬಗೆಯನ್ನು ಜಯಂತರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಕಥೆಯ ಕೇಂದ್ರ ಪಾತ್ರಗಳಾದ ಅಸಾವರಿ ಲೋಕಂಡೆ ಮತ್ತು ಪೋಪಟ್ ಪರಸ್ಪರ ಪ್ರೀತಿಸಿದವರು. ಅವರ ಪ್ರೀತಿಗೆ ಸಮಾಜದ ಯಾವ ನಿಯಮ, ಮಾದರಿಗಳಿಲ್ಲ. ಅವರ ಪ್ರೀತಿಯಲ್ಲಿ ಸಹಜತೆ ಮತ್ತು ಸ್ವಾತಂತ್ರ್ಯವಿತ್ತು. ಅಲ್ಲದೆ ಅವರ ಪ್ರೀತಿಗೆ ಯಾರ ಸಾಕ್ಷೀಕರಣವೂ ಬೇಕಿರಲಿಲ್ಲ. ಆದರೆ ಮದುವೆಯ ಮೂಲಕ ಸಾಂಸ್ಥಿಕ ಬದುಕಿನೊಳಗೆ ಪ್ರವೇಶಿಸಲು ಸಿದ್ಧರಾದಾಗ ಅವರಿಗೆ ಸಮಸ್ಯೆಗಳು ಎದುರಾಗುತ್ತವೆ. ಮದುವೆಯಾಗಲು ಹೊರಟ ಅವರಿಗೆ ಮದುವೆಯ ಹಲವು ನಿಯಮ, ಮಾದರಿಗಳು ಸಮಸ್ಯೆಯನ್ನು ತಂದೊಡ್ಡಿವೆ. ಪರಿಚಯಸ್ಥ ಬಳಗವನ್ನು ಆಹ್ವಾನಿಸಿ ಸಾಕ್ಷೀಕರಿಸಿಕೊಳ್ಳುವ ಅಗತ್ಯ ಈಗ ಎದುರಾಗಿದೆ. ಆದರೆ ಮುಂಬೈನ ನಾಭಿಯೊಳಗೆ ಅನಾಥರಾಗಿ ಬೆಳೆದ ಈ ಜೋಡಿಗಳಿಗೆ ಅವರ ಪರಿಧಿಯಾಚೆಗಿನ ಶಬ್ದಕೋಶಗಳು ಇವು. ಹೆಚ್ಚೆಂದರೆ ನೂರರೊಳಗಿದ್ದ ತಮ್ಮ ಪರಿಚಯಸ್ಥ ಬಳಗವನ್ನು ಆಹ್ವಾನಿಸಲು ಲಗ್ನ ಪತ್ರಿಕೆಯ ಕರಡನ್ನು ಬರೆಯುವಾಗ ಎದುರಾದ ಸಮಸ್ಯೆಗಳಿವು. ಈ ಸಮಸ್ಯೆಗಳನ್ನು ದಾಟಿ ಮದುವೆಯಾಗುವುದರ ಮೂಲಕ ಅಧಿಕೃತವಾದ ವ್ಯವಸ್ಥೆಯೊಂದಕ್ಕೆ ಒಳಪಡುವ ತವಕ ಈ ಜೋಡಿಗಳಿಗೆ. ಆದರೆ ವ್ಯವಸ್ಥೆಗೆ ಒಳಪಡಲು ಸಮಾಜ ಹಲವು ಅಲಿಖಿತ ನಿಯಮಗಳನ್ನು ಜಾರಿಗೊಳಿಸಿದೆ. ಈ ನಿಯಮಗಳು ಸಮಾಜದ ಅಂಚಿಗೆ ತಳ್ಳಲ್ಪಟ್ಟ ವರ್ಗಗಳಿಗೆ ಸಮಸ್ಯೆಯಾಗಿದೆ. ಏಕೆಂದರೆ ವ್ಯವಸ್ಥೆ ಇಂತಹ ಜನರನ್ನು ನಿರ್ಲಕ್ಷಿಸಿದೆ.

ಮದುವೆಯು ಸಂಬಂಧಗಳು ಸಹಜವಾಗಿ ಜೊತೆಗೂಡುವುದನ್ನು ನಿರಾಕರಿಸುತ್ತದೆ. ಇದು ಸಹಜ ಸಂಬಂಧಗಳನ್ನು ಕೃತಕ ಸಂಬಂಧಗಳನ್ನಾಗಿ ಮಾರ್ಪಡಿಸುತ್ತದೆ. "......... ಇಂಥವೆಲ್ಲ ಬಿಡಿ ಬಿಡಿ ಚಿತ್ರಗಳಿಗೊಂದು ವಿಚಿತ್ರ ಭಾರವಾದ ಹಗ್ಗವನ್ನು ಕಟ್ಟಲು ತಯಾರಾಗಿರುವ ಈ ಲಗ್ನಪತ್ರಿಕೆ ಸಮಾಜದ

ನಿರ್ದಯ ನಿಯಮದಂತೆ ತೋರತೊಡಗಿತು. ಮುಚ್ಚಿದ ಕೋಟೆಯ ಬಾಗಿಲಿನಂತೆ ಅದು ಇಬ್ಬರಿಗೂ ಪ್ರತ್ಯೇಕವಾಗಿ 'ನೋಡಿ' 'ಯೋಚಿಸಿ' ಎಂದು ಹೇಳುತ್ತಿತ್ತು."[3] ಎಂಬ ಕತೆಯೊಳಗಿನ ಸಾಲು ಮದುವೆಯು ಪ್ರೀತಿಯಲ್ಲಿದ್ದ ಸಹಜತೆಯನ್ನು ಬದಿಗೊತ್ತಿ, ಸಾಂಸಾರಿಕ ಜವಾಬ್ದಾರಿಗಳೊಳಗೆ ಬಂದಿಸುತ್ತದೆ. ಎಂಬ ನಿಲುವುಗಳು ಕತೆಯೊಳಗೆ ವ್ಯಕ್ತವಾದರೂ, ವಾಸ್ತವವಾಗಿ ಇಂದು ಮದುವೆ ಅನಿವಾರ್ಯವಾಗಿದೆ ಎಂಬದನ್ನು ಸಾರುತ್ತದೆ. ಅಸಾವರಿ ಮತ್ತು ಪೋಪಟ್ ಕಾಲಖಟ್ಟಾವನ್ನು ಕುಡಿಯುವ ಸಂದರ್ಭದಲ್ಲಿ ಆ ಪಾನೀಯವನ್ನು ಮಾರುವ ವ್ಯಾಪಾರಿ ಇವರಿಬ್ಬರನ್ನು ಕೀಟಲೆಯ ಕಣ್ಣುಗಳಿಂದ ನೋಡುತ್ತಾನೆ. ಕಳ್ಳ ಪ್ರಣಯಕ್ಕೆ ಸ್ಥಳ ಹುಡುಕುವ ಪ್ರೇಮಿಗಳಂತೆ ಇವರನ್ನು ಭಾವಿಸುತ್ತಾನೆ. ಈ ನೋಟಕ್ಕೆ ಬೇಸತ್ತ ಅಸಾವರಿ ಕೋಪಗೊಂಡು, ಅಲ್ಲಿಂದ ಹೊರಡುತ್ತಾಳೆ. ಈ ಸಂದರ್ಭ ಅವರ ಸಂಬಂಧಕ್ಕೂ, ಚಾರಿತ್ರ್ಯಕ್ಕೂ ಅಪಮಾನವೆಸಗುವಂತದ್ದಾಗಿದೆ. ಆದರೆ ಕೈಯಲ್ಲಿದ್ದ ಲಗ್ನಪತ್ರಿಕೆಯ ಮಾದರಿಯನ್ನು ನೋಡಿ "ಯಾವುದೋ ಒಂದು ಬಗೆಯ ಗಲೀಜಿನಿಂದ ಇಬ್ಬರನ್ನು ಎತ್ತುವ ಶಕ್ತಿಯೊಂದು ಈ ಲಗ್ನಪತ್ರಿಕೆಗಿದೆ"[4] ಎಂದು ಸಮಾಧಾನಗೊಳ್ಳುತ್ತಾಳೆ. ಮುಂಬೈನಂತಹ ಆಧುನಿಕ ಮತ್ತು ಬಹುಸಂಸ್ಕೃತಿಯ ನಗರದೊಳಗೆ ಈ ನೋಟ ಸಹಜವಾದರೂ ಎಲ್ಲಾ ಜೋಡಿಗಳ ಸಂಬಂಧವನ್ನು ಅದೇ ನೆಲೆಯಲ್ಲಿ ಗ್ರಹಿಸುವುದು ಸರಿ ಇಲ್ಲ. ಈ ಅಸಭ್ಯ ನೋಟದಿಂದ ಪಾರಾಗಲು ಸಂಬಂಧಗಳನ್ನು ಮದುವೆ ಎಂಬ ವ್ಯವಸ್ಥೆಯ ನಿಯಮದೊಳಗೆ ನೆಲೆಗೊಳಿಸಿಕೊಳ್ಳಬೇಕಾಗುತ್ತದೆ. ಗಂಡು ಹೆಣ್ಣಿನ ಚಾರಿತ್ರ್ಯ ರಕ್ಷಣೆಯ ಜೊತೆಗೆ, ಅವರ ಸಂಬಂಧಗಳನ್ನು ನೈತಿಕಗೊಳಿಸುವ ಶಕ್ತಿ ಈ ಮದುವೆಗಿದೆ ಎಂಬ ನಿಲುವು ಕಥೆಗಾರರ ನಿಲುವಾದಂತಿದೆ. ಆ ಮೂಲಕ ಸಂಬಂಧಗಳನ್ನು ಬೆಸೆಯುವಂತಹ ಮದುವೆಯನ್ನು ಪುರಸ್ಕರಿಸಿ, ಇಂದು ಸಿರಿವಂತರ ಸಮುದಾಯ ರೂಢಿಗೆ ತಂದಿರುವ ನಿಯಮಗಳನ್ನು ತಿರಸ್ಕರಿಸಿ, ನಿರ್ಗತಿಕರು ವ್ಯವಸ್ಥೆಯೊಳಗಿನ ಭಾಗವಾಗುವಂತೆ ಮಾಡಿದ್ದಾರೆ.

ಮುಂಬೈ ನಗರಕ್ಕೂ ಈ ನಗರದೊಳಗಿನ ನಿರ್ಗತಿಕರಿಗೂ ಒಂದು ರೀತಿಯ ಸಂಬಂಧ ಏರ್ಪಟ್ಟಿದೆ ಎಂಬ ಚಿಂತನೆಯೇ ವಿಶಿಷ್ಟವೂ, ಅಪರೂಪದ್ದು ಆದದ್ದು. ಕಥೆಯ ಶೀರ್ಷಿಕೆಯಾದ ನೋ ಪ್ರೆಸೆಂಟ್ಸ್ ಪ್ಲೀಸ್ ಉಳ್ಳವರು ತಮ್ಮ ಲಗ್ನ ಪತ್ರಿಕೆಯಲ್ಲಿ ಹಾಕಿಸುವ ಸಾಲಾಗಿದ್ದು, ಈ ಸಾಲಿಗೆ ಮುಂಬೈನ ನಿರ್ಗತಿಕ ವಲಯವನ್ನು ಮುಖಾಮುಖಿಯಾಗಿಸಿದ್ದಾರೆ.

ಅನಾಥರಾದ ಅಸಾವರಿ ಲೋಕಂಡೆ ಮತ್ತು ಪೋಪಟ್ ಮದುವೆಯಾಗಲು ಸಿದ್ದರಿರುತ್ತಾರೆ. ತಮ್ಮ ಲಗ್ನಪತ್ರಿಕೆಯಲ್ಲಿ ಇತ್ತೀಚಿಗೆ ಎಲ್ಲರೂ ಅವರವರ ಲಗ್ನಪತ್ರಿಕೆಗಳಲ್ಲಿ ಹಾಕಿಸುವ ನೋ ಪ್ರೆಸೆಂಟ್ಸ್ ಪ್ಲೀಸ್ ಎಂಬ ವಾಕ್ಯವನ್ನು ಹಾಕಿಸಲು ಅಸಾವರಿ ಇಚ್ಚಿಸುತ್ತಾಳೆ. ಆದರೆ ಈ ಸಾಲನ್ನು ಕುರಿತು ಪುಸ್ತಕ ಮಾರಾಟಗಾರ ತ್ರಿಪಾಠಿ "ಅದೆಲ್ಲ ಶ್ರೀಮಂತರ ಸ್ಟೈಲು ಮಗಳೇ, ನಮಗೆ ಹೇಳಿದ್ದಲ್ಲ ಅದು. ಯಾರಾದರೂ ಪ್ರೀತಿಯಿಂದ ಏನಾದರೂ ಕೊಟ್ಟರೆ ತಗೊಳ್ಳಿ, ಹೊಸ ಬಿಡಾರ ನಿಮ್ಮದು ಬೇಕಾಗುತ್ತದೆ"[5] ಎನ್ನುತ್ತಾನೆ. ನೋ ಪ್ರೆಸೆಂಟ್ಸ್ ಪ್ಲೀಸ್ ಎಂಬ ವಾಕ್ಯವೇ ಶ್ರೀಮಂತರ ಪರಿಧಿಯೊಳಗಿನ ಪರಿಭಾಷೆ. ಶ್ರೀಮಂತರ ಸೌಜನ್ಯಯುಕ್ತ ಸಾಲಾಗಿ ಮೇಲ್ನೋಟಕ್ಕೆ ಕಂಡರೂ ಅದರ ಕಾಳಜಿ ಬೇರೆಯದೇ ನೆಲೆಯಲ್ಲಿದೆ. ಸಿರಿವಂತರಿಗೆ ಅಗತ್ಯ ವಸ್ತುಗಳನ್ನು ಉಡುಗೊರೆ ರೂಪದಲ್ಲಿ ಪಡೆಯಬೇಕಾದ ಯಾವ ತುರ್ತು, ಅನಿವಾರ್ಯತೆ ಇರುವುದಿಲ್ಲ. ಆದ್ದರಿಂದ ಅವರು ಉಡುಗೊರೆ ಬೇಡ ಎನ್ನಲು ಅರ್ಥವಿದೆ. ಆದರೆ ನಿರ್ಗತಿಕರಾದ ಈ ಜೋಡಿಗಳು ಈಗ ತಾನೆ ಸಂಸಾರ ಕಟ್ಟಿಕೊಳ್ಳುತ್ತಿದ್ದಾರೆ. ಅವರಿಗೆ ವಸ್ತುಗಳು ಉಡುಗೊರೆ ರೂಪದಲ್ಲಿ ಬರುವುದು ಅವಶ್ಯಕವಾಗಿದೆ. ಆದ್ದರಿಂದ ಈ ಸಾಲು ಅವರ ಲಗ್ನಪತ್ರಿಕೆಯಲ್ಲಿ ಅನಗತ್ಯ ಎಂಬುದು ತ್ರಿಪಾಠಿಯ ತರ್ಕ.

ಕೊಡುಕೊಳ್ಳುವಿಕೆ ಎಂಬುದು ಅಗತ್ಯ ವಸ್ತುಗಳನ್ನು ಕೊಡುವ ಅಥವ ಪಡೆಯುವ ವ್ಯಾವಹಾರಿಕತೆಯ ಒಂದು ಕ್ರಿಯೆ ಮಾತ್ರವಲ್ಲ. ವ್ಯಕ್ತಿಗಳ ನಡುವಿನ ಆಪ್ತತೆಯನ್ನು ಹೆಚ್ಚಿಸುವ, ಸಂಬಂಧಗಳನ್ನು ಬೆಸೆಯುವ ಪರಿಕಲ್ಪನೆ. ಆದರೆ ನೋ ಪ್ರೆಸೆಂಟ್ಸ್ ಪ್ಲೀಸ್ ಕೊಡುಕೊಳು ಸಂಸ್ಕೃತಿಯನ್ನೆ ನಿರಾಕರಿಸುವ ಸಾಲಾಗಿದೆ. ಇಂತಹ ಸಾಲನ್ನು ಮುಂಬೈನ ನಿರ್ಗತಿಕ ವರ್ಗ ಅನುಕರಣೆ ಮಾಡುವುದು ಉಚಿತವಲ್ಲ. ಈ ವರ್ಗ ತನ್ನ ಸುತ್ತಲಿನ ಜನ ಸಮೂಹದ ಜೊತೆ ದಿನನಿತ್ಯ ಒಡನಾಡಲೇ ಬೇಕು. ಪರಸ್ಪರ ಅವಲಂಭಿಸಿ ಬದುಕು ನಡೆಸಬೇಕು. ಇದರಿಂದ ಕೊಡುಕೊಳ್ಳುವಿಕೆಯು ನಡೆದು, ಸಂಬಂಧಗಳು ಗಟ್ಟಿಗೊಳ್ಳುತ್ತವೆ. ಆದರೆ ಮುಂಬೈನ ನಿರ್ಗತಿಕ ಬಳಗವು ಸಂಬಂಧಗಳಿಂದ ದೂರ ಸರಿಯುವ ನೋ ಪ್ರೆಸೆಂಟ್ಸ್ ಪ್ಲೀಸ್ ವಾಕ್ಯವನ್ನು ತಮ್ಮ ಲಗ್ನಪತ್ರಿಕೆಯಲ್ಲಿ ಬಯಸುವುದು ಸೂಕ್ತವಲ್ಲ. ಸಿರಿವಂತರ ಪದ್ಧತಿಗಳ ಅನುಕರಣೆ ಈ ಬಡ ಮತ್ತು ನಿರ್ಗತಿಕ ವರ್ಗಕ್ಕೆ ಅನಗತ್ಯ ಎಂಬ ನಿಲುವು ಕತೆಗಾರರದ್ದು.

ಮುಖ್ಯವಾಗಿ ಮುಂಬೈನ ನಿರ್ಗತಿಕ ಪ್ರಪಂಚಕ್ಕೂ, ಮುಂಬೈಗೂ ಗಾಢ ಸಂಬಂಧವಿದೆ. ಈ ಸಂಬಂಧ ತಾಯಿ ಮಕ್ಕಳಿಗೂ ಇರುವ ಸಂಬಂಧದಂತೆ. ತನ್ನೊಳಗೆ ಇರುವ ಬಡ ಮತ್ತು ನಿರ್ಗತಿಕರಿಗೆಲ್ಲ ಪೋಷಕನಾಗಿ ಮುಂಬೈ ನಿಂತಿದೆ. ಇಡೀ ಮುಂಬೈಗೂ ಈ ನಿರ್ಗತಿಕ ವರ್ಗಕ್ಕೂ ಕೊಡುಕೊಳ್ಳು ಸಂಬಂಧ ಇದೆ. ಪೋಪಟ್‌ನು ಕಥೆಯ ಸಂದರ್ಭವೊಂದರಲ್ಲಿ "ನಮ್ಮನ್ನು ಸಾಕಿ ಬೆಳೆಸಿದ್ದು ಮುಂಬೈ ಯಾರ ಯಾರದ್ದೋ ಹೆಸರಿಟ್ಟುಕೊಂಡು ಹಾಗೆಲ್ಲ ಮುಂಬೈಗೆ ಅಪಮಾನ ಮಾಡಬಾರದು ನಾವು"[6] ಎನ್ನುತ್ತಾನೆ. ಈ ವಾಕ್ಯದ ಅರ್ಥಾನುಸಾರ ಈ ಶಹರವು ಅಲ್ಲಿನ ಅನಾಥ ವರ್ಗಕ್ಕೆ ಅಸ್ತಿತ್ವಕೊಟ್ಟು ಅವರನ್ನು ಸಲಹುವ ಮಾತೃ ಸ್ಥಾನದಲ್ಲಿ ನಿಂತಿದೆ. ಅದೆಷ್ಟೋ ಅನಾಥರಿಗೆ ಮುಂಬೈ ಬದುಕನ್ನು ಕೊಟ್ಟಿದೆ, ಮತ್ತು ಬದುಕು ಕಟ್ಟಿಕೊಳ್ಳಲು ಸಹಕಾರಿಯಾಗಿದೆ. ಇಷ್ಟು ಆಪ್ತ ಸಂಬಂಧವನ್ನು ಹೊಂದಿರುವ ನಿರ್ಗತಿಕ ಸಮೂಹವು, ವ್ಯವಸ್ಥೆಯೊಳಗಿನ ನಿಯಮಕ್ಕೆ ಒಳಪಡುವಾಗ ನಮಗೆ ಯಾರ ಸಂಬಂಧಗಳು ಬೇಡ ಎಂದು ಅಂತರ ಕಾಯ್ದುಕೊಳ್ಳುವುದು ಉಚಿತವಲ್ಲ. ಎಲ್ಲರ ಒಳಗೊಳ್ಳುವಿಕೆಯೇ ಮುಂಬೈನ ಬದುಕು ಎಂಬುದು ನೋ ಪ್ರೆಸೆಂಟ್ಸ್ ಪ್ಲೀಸ್ ಕತೆಯ ಅರ್ಥವಾಗಿದೆ.

ಮುಂಬೈ ಒಂದು ಜೀವಂತ ನಗರವಾಗಿದ್ದು, ಅದರ ತತ್ವವೇ ಪೋಷಣೆ ಎಂಬ ಕತೆಗಾರರ ನಿಲುವು ಹೊಸತನದ ಚಿಂತನೆಯಾಗಿದೆ. ಈ ಶಹರದೊಳಗೆ ಜನಜಂಗುಳಿ, ಜನರ ಯಾಂತ್ರಿಕ ಚಲನೆ, ಬಂಡವಾಳಿಗರ ಸ್ವಾರ್ಥತೆಗಳ ನಡುವೆ ಜೀವಪರ ಮೌಲ್ಯಗಳು, ಜೀವನ ಪ್ರೀತಿ ಇದ್ದು ಈ ಶಹರದಲ್ಲಿ ಜೀವನೋತ್ಸಾಹ ಹೆಚ್ಚಾಗಿಯೇ ಇದೆ ಎಂಬ ನಿಲುವು ಕತೆಗಾರರದ್ದು.

ಮುಂಬೈ ವೈವಿಧ್ಯತೆಯ ಆಗರವಾಗಿದೆ. ಅಲ್ಲಿಯ ಜನರ ಬದುಕು ಸಹ ಭಿನ್ನ ಭಿನ್ನವಾಗಿದೆ. ಇಂತಹ ಮಹಾನಗರವಾಸಿಗಳ ಬದುಕನ್ನು ಕುರಿತಂತೆ ಜಿ. ಎಸ್. ಶಿವರುದ್ರಪ್ಪನವರು ಹಲವು ದಶಕಗಳ ಹಿಂದೆಯೆ ತಮ್ಮ ಕವಿತೆಯೊಂದರಲ್ಲಿ ಕಟ್ಟಿಕೊಟ್ಟಿದ್ದಾರೆ. "ಈ ಲಕ್ಷ ದಾರಿಗಳ ಚದುರಂಗದಾಟದಲಿ, ನೂರು ಬೆಳಕಿನ ಕೆಳಗೆ ಯಾರದು ಕೈ ಗೊಂಬೆಯಾಗಿ ಮುಂದುವರಿಯುವುದು ; ಏಳುವುದು, ಬಟ್ಟೆಯಲ್ಲಿ ಮೈ ತುರುಕಿ ಓಡುವುದು............ "[7] ಮುಂಬೈನೊಳಗಿನ ಕಾರ್ಮಿಕ ಬದುಕು, ಜನಸಂದಣಿ, ಅಲ್ಲಿಯ ಜನರ ಜೀವನ ಶೈಲಿಯನ್ನು ಈ ಕವಿತೆ ಚಿತ್ರಿಸಿದೆ. ಜಯಂತರ ಕತೆಯೊಳಗೆ ಕವಿತೆಯ ವಾಸ್ತವ ಚಿತ್ರಣದೊಂದಿಗೆ ಮುಂಬೈನೊಳಗಿನ ಮಾನವ ಸಂಬಂಧ, ಜೀವನಪ್ರೀತಿಯಂತಹ ಅಂಶಗಳು ಸ್ಥಾನಪಡೆದಿವೆ.

ಈ ಕಥೆಯು ಸಂಬಂಧಗಳನ್ನು ಬೆಸೆಯುವ, ಸಮಾಜದ ನಿರ್ದಯ ನಿಯಮಗಳನ್ನು ಪ್ರಶ್ನಿಸುವ ಮತ್ತು ಮೀರುವ ಚಿಂತನೆಯನ್ನು ಒಳಗೊಂಡಿದೆ. ಜಯಂತರ ಹಲವು ಕಥೆಗಳು ಇದೇ ಮಾದರಿಯಲ್ಲಿವೆ. " ......... ಇವರ ಕಥೆಗಳು ಅದೇ

ನೋವು ವಿಷಾದಗಳನ್ನು ದಾಖಲಿಸುತ್ತಲೇ ಎಲ್ಲೋ ಒಂದು ಕಡೆ ಮಾನವ ಚೇತನ ತನ್ನ ಸುತ್ತಲೂ ಇರುವ ವ್ಯವಸ್ಥೆಯನ್ನು ಮೀರುವ ಪ್ರಯತ್ನವನ್ನು ಮಾಡುವುದನ್ನು, ಹಾಗೂ ಆ ಪ್ರಯತ್ನವೇ ಅದಕ್ಕೆ ಒಂದು ಬಗೆಯ ಘನತೆಯನ್ನು ತಂದುಕೊಡುವುದನ್ನು ದಾಖಲಿಸುತ್ತವೆ"[8] ಎಂಬ ಸಿ. ಎನ್. ರಾಮಚಂದ್ರನ್ ಅವರ ಅಭಿಪ್ರಾಯವನ್ನು ಈ ಕತೆಗೂ ಅನ್ವಯಿಸಬಹುದಾಗಿದೆ.

ಈ ಕಥೆಯಲ್ಲಿ ಮುಂಬೈ ಮಾತೃವಿನ ಸ್ಥಾನವನ್ನು ಅಲಂಕರಿಸಿದೆ. ತನ್ನೊಡಲಿಗೆ ಬಂದ ಜನರಿಗೆಲ್ಲ ಸಂಬಂಧಗಳ ಬೆಸುಗೆಗೆ ಅಡ್ಡಿಯಾಗಿರುವ ಗುರುತುಗಳನ್ನು ಕಳಚಿ, ಭೇದವೆಣಿಸದೆ ಬಂದ ಜನರನ್ನೆಲ್ಲ ಸಲಹುವ ನಗರವಾಗಿ ಚಿತ್ರಿತವಾಗಿದೆ. ಮುಖ್ಯವಾಗಿ ವ್ಯವಸ್ಥೆಯ ಅಂಚಿಗೆ ತಳ್ಳಲ್ಪಟ್ಟ ಜನರ ಮೂಲಕ ಇಡಿ ಸಮಾಜವನ್ನು, ಅದರೊಳಗಿನ ನಿಯಮಗಳನ್ನು ಸಬಲ್ಟ್ರನ್ ಮಾದರಿಯಲ್ಲಿ ನೋಡಿರುವ ಬಗೆ ವಿಶಿಷ್ಟವಾಗಿದೆ. ನೋ ಪ್ರೆಸೆಂಟ್ಸ್ ಪ್ಲೀಸ್ ಕತೆಯನ್ನು ಒಳಗೊಂಡಂತೆ ಜಯಂತರ ಬಹುತೇಕ ಕಥೆಗಳು ಈ ಮಾದರಿಯಲ್ಲಿವೆ. ಸಮಾಜದ ಅಂಚಿನಲ್ಲಿರುವ ಜನರ ಲೋಕದೃಷ್ಟಿಯನ್ನು ಕೆಲ ದಶಕಗಳ ಹಿಂದೆಯೇ ಕನ್ನಡ ಕಥಾ ಲೋಕಕ್ಕೆ ತಂದ ಇವರ ಕೊಡುಗೆ ಅನನ್ಯವಾದದ್ದು.

ಸಮಾಜದೊಳಗೆ ಬಲಿಷ್ಠವೂ, ಶ್ರೀಮಂತವೂ ಆದ ಜನ ಸಮುದಾಯವು ತನ್ನ ವರ್ಗದ ಹಿತಾಸಕ್ತಿಗಾಗಿ ಕಾಲಕಾಲಕ್ಕೆ ತನ್ನದೆ ಆದ ನಿಯಮ, ಪದ್ಧತಿಗಳನ್ನು ಜಾರಿಗೊಳಿಸಿಕೊಳ್ಳುತ್ತವೆ. ಈ ಪದ್ಧತಿಗಳಿಗೆ ಸೀಮಿತ ಸಮುದಾಯದ ಹಿತಾಸಕ್ತಿ ಕಾಪಾಡುವುದೊಂದೆ ಗುರಿ. ಸಮಾಜದ ಇತರೆ ವರ್ಗಗಳ ಜೀವನಕ್ರಮದ ಬಗ್ಗೆ ಈ ಶ್ರೀಮಂತ ಪರಿವಾರಕ್ಕಾಗಲಿ, ಅವರ ಪದ್ಧತಿಗಳಿಗಾಗಲಿ ಕಾಳಜಿ ಇರುವುದಿಲ್ಲ. ಆದ್ದರಿಂದ ಇವರ ನಿಯಮಗಳನ್ನು ಸಮಾಜದ ಅಂಚಿನಲ್ಲಿರುವ ಸಮುದಾಯ ಕುರುಡಾಗಿ ಅನುಕರಿಸುವುದು ಸರಿಯಲ್ಲ. ಹಾಗೇನಾದರು ಅನುಸರಿಸಿದರೆ ಈ ಸಮುದಾಯಗಳು ತಮ್ಮ ಅಸ್ತಿತ್ವವನ್ನೆ ರೂಪಾಂತರಿಸಿಕೊಳ್ಳಲು ಹೋಗಿ ಸಮಸ್ಯೆಯ ಸುಳಿಗೆ ಸಿಲುಕುತ್ತವೆ ಎಂಬುದು ಈ ಕತೆಯ ನಿಲುವಾಗಿದೆ.

**ಕೊನೆಟಿಪ್ಪಣಿಗಳು**

1. ದೇವನೂರು ಮಹಾದೇವ. ಕುಸುಮಬಾಲೆ. ಪು. ಸಂ. 103
2. ನಾಯಕ. ಜಿ. ಎಚ್. ಮೌಲ್ಯಮಾರ್ಗ. ಸಂಪುಟ ಒಂದು. ಪು. ಸಂ. 91
3. ಜಯಂತ ಕಾಯ್ಕಿಣಿ. ನೋ ಪ್ರೆಸೆಂಟ್ಸ್ ಪ್ಲೀಸ್. ಪು. ಸಂ. 232
4. ಅದೇ. ಪು. ಸಂ. 234
5. ಅದೇ. ಪು. ಸಂ. 238
6. ಅದೇ. ಪು. ಸಂ. 237
7. ಶಿವರುದ್ರಪ್ಪ. ಜಿ. ಎಸ್. ಸಮಗ್ರ ಕಾವ್ಯ. ಪು. ಸಂ. 340
8. ರಾಮಚಂದ್ರನ್. ಸಿ. ಎನ್. ಆಖ್ಯಾನ – ವ್ಯಾಖ್ಯಾನ. ಪು. ಸಂ. 419

**ಪರಾಮರ್ಶನ ಗ್ರಂಥಗಳು**


- ದೇವನೂರು ಮಹಾದೇವ. (2022). ಕುಸುಮಬಾಲೆ. (ಹದಿನಾಲ್ಕನೇ ಮುದ್ರಣ), ಪುಸ್ತಕ ಪ್ರಕಾಶನ.
- ಜಯಂತ ಕಾಯ್ಕಿಣಿ. (2022). *ನೋ ಪ್ರೆಸೆಂಟ್ಸ್ ಪ್ಲೀಸ್.* (ಎರಡನೇ ಮುದ್ರಣ), ಅಂಕಿತ ಪುಸ್ತಕ.
- ನಾಯಕ ಜಿ. ಎಚ್. (2011). *ಮೌಲ್ಯಮಾರ್ಗ. ಸಂಪುಟ ಒಂದು.* ಸಿರಿವರ ಪ್ರಕಾಶನ.
- ರಾಮಚಂದ್ರನ್ ಸಿ. ಎನ್. (2019). ಆಖ್ಯಾನ – ವ್ಯಾಖ್ಯಾನ. (ನಾಲ್ಕನೇ ಮುದ್ರಣ). ಸಪ್ನ ಬುಕ್ ಹೌಸ್.
- ಶಿವರುದ್ರಪ್ಪ ಜಿ. ಎಸ್. (2019). *ಸಮಗ್ರ ಕಾವ್ಯ.* ಕನ್ನಡ ಮತ್ತು ಸಂಸ್ಕೃತಿ ಇಲಾಖೆ.